# ಕಾನನ

SEPTEMBER 2012

ನಿಸರ್ಗದೆಡೆಗೆ ಪಯಣ

## ಲೇಖನಗಳು





ಅನಿಸಿಕೆ

E-mail: kaanana.mag@gmail.com

ಮುಖಪುಟ: ಕಬಿನಿ ನದಿ

# ಸಂಪಾದಕೀಯ

ಭೂಮಿ ನಮ್ಮ ಮನೆ. ಈ ಮನೆನಮ್ಮಂತೆಯೇ ಇತರ ಜೀವಸಂಕುಲಗಳಾದ ಗಿಡ ಮರ ಕೀಟಾದಿ ಜೀವಿಗಳಿಗೂ ಇರುವ ಏಕಮಾತ್ರ ತಾಣ. ಇಂದು ಹೆಚ್ಚುತ್ತಿರುವ ಮಾನವರ ಜನಸಂಖ್ಯೆಯಿಂದ ಪ್ರಕೃತಿಯ ಮೇಲೆ ಎಲ್ಲಾಸ್ಥರಗಳಲ್ಲೂ ತೀವ್ರವಾದ ಒತ್ತಡ ಹೇರುತ್ತಿದ್ದಾನೆ. ಈ ಭೂಮಿ ಮಾನವರಿಗೆ ಮಾತ್ರ ಸೇರಿದ್ದು ಎಂಬಂತೆ ವರ್ತಿಸುತ್ತಿದ್ದಾನೆ. ಇತರೆ ಎಲ್ಲಾ ಜೀವಿಗಳ ಜೀವಿಸುವ ಹಕ್ಕನ್ನು ಕಸಿದುಕೊಂಡಿದ್ದಾನೆ. ಬ್ರುಹತ್ ಸಂಕೀರ್ಣ ವ್ಯವಸ್ಥೆಯಾದ ಈ ಜೀವ ವ್ಯವಸ್ಥೆಯಲ್ಲಿ ಮಾನವ ತನ್ನ ಏಕಸಾಮ್ಯತೆ ಸಾಧಿಸ ಹೊರಟಿದ್ದಾನೆ. ವಾತಾವರಣ ರಕ್ಷ ಓಸೋನ್ ಹಾಳಾಗಿದ್ದು ನಮ್ಮಿಂದಲೆ ಇದನ್ನು ಸರಿಮಾಡಬೇಕಾದದ್ದು ನಾವೇ ಎಂಬ ಮಾತಿಗೆ ಎರಡು ಮಾತಿಲ್ಲ. ಆದರೂ ಇನ್ನು ಕೆಲವು ಅತ್ಯಮೂಲ್ಯ ವಿಚಾರಗಳು ನಮ್ಮ ಮನೆಯ ಹತ್ತಿರವೆ ಇವೆ.

ನಾವು ಬಳಸಿ ಹೊರಬಿಡುವ ಕೊಳಚೆ ನೀರು ಎಲ್ಲಿ ಹೋಗುತ್ತದೆ? ಇದರಿಂದ ಇತರೆ ಜೀವಿಗಳಿಗೆ ಏನೇನು ತೊಂದರೆಯಾಗಬಹುದು? ಹೆಚ್ಚು ಹೆಚ್ಚು ನೀರನ್ನು ಹೊರತೆಗೆಯುತ್ತಿದ್ದೇವೆ? ಮುಂದೆ ಭವಿಷ್ಯದಲ್ಲಿ ನಮ್ಮ ಮಕ್ಕಳಿಗೆ ಸಿಗುತ್ತದೆಯೆ? ನಮಗಿಷ್ಟ ಬಂದಂತೆ ಯಂತ್ರಗಳನ್ನು ಬಳಸಿ ಕೆರೆ, ಕುಂಟೆ, ಗೋಮಾಳ, ಜೌಗು ಪ್ರದೇಶ, ಹುಲ್ಲು ಗಾವಲು, ಕಾಡು ಎನ್ನದೆ ಜನವಸತಿಗಾಗಿ ಸಕಲವನ್ನು ಹಾಳುಮಾಡುತ್ತಿದ್ದೇವೆ. ಬೆಟ್ಟಗಳನ್ನೇ ಕರಗಿಸಿ ಬ್ರಿಡ್ಜುಗಳನ್ನು ನಿರ್ಮಿಸುತ್ತಿದ್ದೇವೆ. ಮಣ್ಣಿನ ದಿಬ್ಬಗಳನ್ನೇ ಕರಗಿಸಿ ಮರಳನ್ನು ತೆಗೆಯುತ್ತಿದ್ದೇವೆ. ಈಗೆ ಸರ್ವಭಾಮಿತ್ವ ಸಾಧಿಸಿ ಇತರ ಜೀವಿಗಳ ಬದುಕನ್ನು ಹಾಳು ಮಾಡಿ ಬದುಕುವ ಬದುಕು ಇನ್ನೆಷ್ಟು ದಿನ.? ಇವುಗಳ ಬಗ್ಗೆ ಸ್ವಲ್ಪ ನಾವು ನೀವು ಯೋಚಿಸುವಂತಾಗಲಿ.

ಹುಲಿ ಗಣತಿಯಲ್ಲಿ ಸ್ವಯಂಸೇವಕರಾಗಿ ಭಾಗವಹಿಸಿದ್ದ ಎಸ್. ಮುರಳಿ ಯವರು ಅಲ್ಲಿ ತಮಗಾದ *ನಾಗರ ಹುಲಿ*ಯ ಅನುಭವವನ್ನು ಚಿತ್ರಿಸಿದ್ದಾರೆ. ಅಂಬರದಲ್ಲಿ ಹಾರಿ ಚಿತ್ತಾರ ಬಿಡಿಸುವ **ಸ್ವಾಲೋಗಳ ಸಾಗರ** ದಲ್ಲಿ ಅಂಬರ ಗುಬ್ಬಿಯ ಬಗ್ಗೆ ಅಶ್ವಥ ಕೆ.ಎನ್ ರವರು ಮನಮೋಹಕವಾಗಿ ವರ್ಣಿಸಿದ್ದಾರೆ. ಮರವು ತನ್ನ ನಿಜ ಸ್ವರೂಪವನ್ನು ಅಸ್ವಾದಿಸಿದ ಜನರ ಬಗ್ಗೆ ಮರುಗಿರುವ ಚಿತ್ರವನ್ನು, ನನ್ನ ದನಿ ಕವನದಲ್ಲಿ ಶಂಕರಪ್ಪನವರು ಚಿತ್ರಿಸಿದ್ದಾರೆ. ವಿ ವಿ ಅಂಕಣದಲ್ಲಿ ವಯೋಜರ್ ನೌಖೆಯ ನಮ್ಮ ಸೌರವ್ಯೂಹವನ್ನು ದಾಟಿ ಮುಂದುವರಿದ ಸಾಹಸಮಯ ವಿದ್ಯಾಮಾನವನ್ನು ವರ್ಣಿಸಿದ್ದಾರೆ.

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.**

ಇ-ಮೇಲ್ ವಿಳಾಸ : **kaanana.mag@gmail.com**

**Wildlife Conservation Group**



# ನಾಗರ ಹುಲಿ

ಮುಂದೊಂದು ಕಾಲದಲ್ಲಿ ನಾವು ನೀವು ತೆಗೆದ ಸ್ಟಿಲ್ ಫೋಟೋಗಳು, ಹಳೇ ವಿಂಟೇಜ್ ಕಾರುಗಳ ರೀತಿ, ಬಾಡಿಗೆಗೆ ಕೊಡುವ ಸಮಯ ಬಹು ಬೇಗ ಬರುಬುಹುದು. ಮಕ್ಕಳ ಪಠ್ಯದಲ್ಲಿ ಚಿತ್ರಗಳು ಅಚ್ಚಾಗಿ, ಇದೇ ಹುಲಿ ಎಂದು ಗುರುತಿಸುವ ಸಮಯ ಸಮೀಪಿಸುತ್ತಿದೆ. ಮನುಷ್ಯನ ಬಯಕೆಯೋ ಅಥವಾ ಮೂಡತನವೊ ಗೊತ್ತಿಲ್ಲ, ಜನಸಂಖ್ಯೆಯಂತೂ ಮಿತಿ ಮೀರಿದೆ. ಎಲ್ಲಾ ರೀತಿಯಲ್ಲೂ ಒತ್ತಡ ಹೆಚ್ಚುತ್ತಿದೆ. ಲ್ಯಾಂಡ್ ಮಾಫಿಯಾದ ಕಾಲದಲ್ಲಿ 3 x 6 ಜಾಗಕ್ಕೆ ಊಹಿಸಲಾಗದ ಕೃತ್ಯಗಳು ನಡೆಯುತ್ತಿವೆ. 150 ವರ್ಷದ ಹಿಂದೆ ಟಾಲ್ಸ್ಟಾಯ್ ಬರೆದ “how much land does a man need” ಕಥೆಯು ಅಂದಿಗೆ ಅಷ್ಟೊಂದು ಅನ್ವಯಿಸದಿದ್ದರೂ ಈ ಕಾಲಕ್ಕಂತೂ ಸಿಂಕ್ ಆಗುತ್ತದೆ. ಜಾಗ ಎಷ್ಟು ಕಂಪ್ರೆಸ್ಡ್ ಆಗಿದೆ ಎಂದರೆ ಹಿಂದಿನ ನೆನಪಿಟ್ಟುಕೊಂಡು ಅದೇ ಜಾಗಕ್ಕೆ ಹುಡುಕ ಹೋದರೆ ದಾರಿ ತಪ್ಪಿದ ಮಗನಂತೆ ಕಕ್ಕಾಬಿಕ್ಕಿಯಾಗುವುದು ಖಂಡಿತ. ಇದೆಲ್ಲ ನಮ್ಮ ಬಗೆಗಿನ ಕಾಳಜಿ ಎಂದಾದರೆ ನಮ್ಮ ವನ್ಯ ಸಂತತಿಯ ಬಗ್ಗೆ ಕಾಳಜಿ ತೋರಿಸಬೇಕಾದುದು ನಮ್ಮ ಆದ್ಯ ಕರ್ತವ್ಯ.

ಪ್ರಾಣಿ ಸಂಕುಲದಲ್ಲಿ ಅತ್ಯಂತ ಬುದ್ಧಿ ಜೀವಿಯಾಗಿರುವ ಚಿಂಪಾಂಜಿಯನ್ನೇ ತೆಗೆದುಕೊಳ್ಳೋಣ, ಅದು ಎಂದಿಗೂ ಇತರೆ ಜೀವಿಯ ಬಗ್ಗೆಯಾಗಲೀ, ಭೂಮಿಯ ಬಗ್ಗೆಯಾಗಲೀ, ಕಾಡು ಉಳಿಸುವುದಾಗಲೀ, ಭೂಮಿಯಿಂದಾಚೆಯಾಗಲೀ ಯೋಚಿಸಲೂ ಸಾಧ್ಯವೇ ಇಲ್ಲ. ತನ್ನ ಊಟವಾಯಿತು, ಸಂಸಾರವಾಯಿತು. ಮಾನವ, ಜೀವವಿಕಾಸದ ಫಲವೇ ಎಂದನಿಸುತ್ತದೆ. ಹತ್ತಿರದ ಬುದ್ಧಿಜೀವಿಗೂ, ಮನುಷ್ಯನಿಗೂ, ಸೂರ್ಯನಿಗೂ, ಹತ್ತಿರದ ನಕ್ಷತ್ರ ಆಲ್ಫಾ ಸೆಂಟರಿಗೂ ಇರುವ ಅಂತರವೇ ಅಜಗಜಾಂತರ. ಮುಂದಿನ ವಿಕಾಸ ಯಾವ ರೀತಿ ಇರುತ್ತದೆಯೋ ಅಥವಾ ಇನ್ನೇನಿದೆ ಎಂದೆನಿಸುವುದುಂಟು. ಆದರೆ ಮನುಷ್ಯನೆಂಬ ಜೀವ ವಿಕಾಸದ ಫಲ ಹೆಚ್ಚು ನೆಗೆಟಿವ್ ಆಗಿರುವುದು ವಿಪರ್ಯಾಸ. ನಾವು ಮಾಡುತ್ತಿರುವ ಈ ಕ್ರಿಯೆ ನಮ್ಮ ಗುಂಡಿ ನಾವೇ ತೋಡಿ ಬೇರೆ ಜೀವಿಗಳನ್ನು ಗುಂಡಿಗೆ ದಬ್ಬುವ ಕಾರ್ಯ ಭರದಿಂದ ಸಾಗಿದೆ. ಪ್ಯಾರಸೈಟ್ ಆದ ಲಾಡಿ ಹುಳ ದೇಹದಲ್ಲಿ ಹೊಕ್ಕು ಅದು ಸಾರವನ್ನು ಹೀರಿ ದೊಡ್ಡದಾಗುತ್ತಿರುತ್ತದೆ. ಕೊನೆಗೆ ದೇಹ ಸತ್ತ



ಮೇಲೆ ಅದೂ ಸಾಯಬೇಕು. ಕ್ಯಾನ್ಸರ್ ಕೂಡ ಹಾಗೆ. ಮನುಷ್ಯನೆಂಬ ಜೀವಿ ಭೂಮಿಯೆಂಬ ಜೀವಿಯ ದೇಹಕ್ಕೆ ಹೊಕ್ಕ ಪ್ಯಾರಸೈಟ್ ಆದನೇ? ದಾಸರು ಹೇಳಿದ ಮಾನವ ಜನ್ಮ ದೊಡ್ಡದು, ಇರುವುದೊಂದು ಜನ್ಮ ಎಂಬವುದನ್ನು ಅಪಾರ್ಥ ಮಾಡಿಕೊಂಡು ಹುಟ್ಟಿ, ಏಕೈಕ ಗುರಿ ಆಸ್ತಿ ಪಾಸ್ತಿ ಮಾಡುವುದು ಎಂಬುದು ಮನದಾಳದಲ್ಲಿ ಬೇರೂರಿದ್ದರಿಂದ ನಮ್ಮ ಕಾನನಗಳ ಬೇರುಗಳು, ಸ್ವಾರ್ಥಕ್ಕೆ ಬಲಿಯಾಗುತ್ತಿವೆ. ಕಾನನಗಳು ಮಾಯವಾಗುತ್ತಿರುವುದು ಹೆರಿಡಿಟಿಯಿಂದಲೋ ಅನ್ನುವ ಹಾಗೆ ಭಾಸವಾಗುತ್ತಿದೆ.

ಸರ್ಕಾರಗಳು ಇದರ ಬಗ್ಗೆ ಖಂಡಿತವಾಗಿಯೂ ಯೋಚನೆ ಮಾಡುತ್ತಿವೆಯಾದರೂ ಇಂಪ್ಲಿಮೆಂಟೇಷನ್ ಟೈಮ್ನಲ್ಲಿ ಎಡವಿ ಮುಗ್ಗರಿಸಿದಾಗ 50% ಹಣ ಮಾಯವಾಗಿರುತ್ತದೆ. ಬಿಲ್ಲುಗಳು ಹೊಂದಿಸುವುದು, ಹುಷಾರಾಗಿ ಸಿಕ್ಕಿಕೊಳ್ಳದ ಹಾಗೆ ಹಣ ತಿನ್ನುವುದು ಇತ್ಯಾದಿ ನೆಗೆಟಿವ್ ಥಾಟ್ಸ್ ಕಡೆಗೆ ಹೆಚ್ಚು ಶಕ್ತಿ ಮತ್ತು ಸಮಯ ವ್ಯಯವಾಗುತ್ತಿದೆ. ಸರ್ಕಾರ ಎಷ್ಟೇ ಕೊಚ್ಚಿಕೊಂಡರು, ಎಷ್ಟೇ ತ್ಯಾಪೆ ಮುಚ್ಚಿದರೂ ವೆಸ್ಟ್ರನ್ ಕಂಟ್ರಿಗಳಲ್ಲಿ ಬರುವ ನಿಷ್ಠೆ ಮತ್ತು ಕಾರ್ಯ ವೈಕರಿ ನಮ್ಮ ದೇಶದಲ್ಲಿ ಊಹಿಸಲೂ ಸಾಧ್ಯವಿಲ್ಲವೇನೋ. ಖಂಡಿತವಾಗಿಯೂ ದೇವರೇ ಗತಿ. ಟಿಪಿಕಲ್ ಇಂಡಿಯನ್ ಮೆಂಟಾಲಿಟಿಯ ತಳಪಾಯ ಸ್ವಾರ್ಥವಾಗಿದ್ದು ಇತರೇ ಜೀವಿಗಳಿರಲಿ ಇತರರ ಬಗ್ಗೆ ಕನಿಷ್ಠ ಕಾಳಜಿ ಕೂಡ ಇಲ್ಲ. ಈ ರೀತಿಯ ಸರ್ಕಾರದ ಪ್ರಾಜೆಕ್ಟಳಲ್ಲಿ "ಪ್ರಾಜೆಕ್ಟ್ ಟೈಗರ್" ಕೂಡ ಒಂದು. 70ರ ದಶಕದಲ್ಲಿ ಶುರುಮಾಡಿದ್ದರೂ, ಸರ್ಕಾರ ಸಕ್ಸಸ್ ಎಂದರೂ ಏನೂ ಹೇಳಿಕೊಳ್ಳುವ ಇಂಪ್ರೂವ್ ಮೆಂಟ್ ಆಗಲಿಲ್ಲ.



2008ರ ಹುಲಿ ಗಣತಿಗೆ ಸಡನ್ ಆಗಿ ಸ್ನೇಹಿತರಾದ ಏಂಜೆಲ್ ಸುರೇಶರಿಂದ ಕಾಲ್ ಬಂತು. ಸರಿ ಎಲ್ಲರೂ ಒಡಗೂಡಿ ಅಪ್ಲಿಕೇಷನ್ ಫಿಲ್ ಮಾಡಿ ತರಾತುರಿಯಿಂದ ಮರುದಿನವೇ ಅಪ್ಲೈ ಮಾಡಿದೆವು. ಸರ್ಕಾರ ಮತ್ತು ಪಬ್ಲಿಕ್ ಸೇರಿ ಮಾಡಿಕೊಂಡ ಒಪ್ಪಂದ. ಸಿಂಗ್ ರವರು ಪಿ.ಎಮ್. ಆದ ಮೇಲೆ ಹೊರದೇಶಗಳಿಂದ ಅನೇಕ ವನ್ಯಜೀವಿ ಸಂಸ್ತೆಗಳಾದ WWF ಮತ್ತು ಅನೇಕ NGOಗಳು ಸರಿಯಾಗಿ ಪಂಚ್ ಮಾಡಿದ್ದರಿಂದ ಈ ಬಾರಿಯ ಸೆನ್ಸಸ್ ಟೆಕ್ನಿಕ್ ಬೇರೆ ತರ ಮಾಡಬೇಕೆಂದು ನಿರ್ಧರಿಸಿದ್ದರು. ಇಡೀ ಪ್ರಪಂಚದಲ್ಲೇ ಅತಿ ಹೆಚ್ಚು ಹುಲಿ ಸಂಖ್ಯೆಯಿರುವ ನಮ್ಮ ದೇಶದಲ್ಲಿ (ಬರೀ 1250) ಅಟ್ಲೀಸ್ಟ್ ಪ್ರೆಸ್ಟೀಜ್ ಗೋಸ್ಕರವಾದರೂ ಈತರ ಪ್ರಾಜೆಕ್ಟ್ ಒಂದು ಇರಲಿ ಎಂದು ಚಾಲನೆ ಮಾಡಿದ್ದರು. ಇದಲ್ಲದೆ ಸರ್ಕಾರ ತನ್ನ ಕಾರ್ಮಿಕರನ್ನು ಬಿಟ್ಟರೆ ಬೇರೆಯವರನ್ನು ಕಾಡಿನ ಒಳಗೇ ಬಿಡದೆ ಇರಲು ಕಾರಣ ಅವರ ಭ್ರಷ್ಟಾಚಾರಗಳು ಹೊರಬೀಳುತ್ತವೆಂದು. ಇತ್ತೀಚೆಗಷ್ಟೇ ಘನ ಕರ್ನಾಟಕ ಸರ್ಕಾರದ ಆದೇಶವೊಂದರಲ್ಲಿ ಯಾವುದೇ ಹುಲಿ ಯೋಜನೆ ರಕ್ಷಿತ ಕರ್ನಾಟಕದ ಕಾಡುಗಳಲ್ಲಿ ಇಬ್ಬರನ್ನು ಬಿಟ್ಟರೆ ರಿಸರ್ಚ್ ಮಾಡುವ ಹಾಗಿಲ್ಲ ಎನ್ನುವುದು. ಎಂತಹ ವಿಪರ್ಯಾಸ ನೋಡಿ.




ನಮ್ಮ ಹುಲಿಗಳಿಗೆ ಕಡಿಮೆಯಾಗಿರುವುದು ರಿಸರ್ಚ್ ಒಂದೇ. ಅಸೆಂಬ್ಲಿಯಲ್ಲಿ ನಡೆದ ಸ್ಕ್ಯಾಮ್ ಬಳಿಕ ಯಾವುದೇ ಖಾಸಗಿ ಚಾನೆಲ್ ಒಳಗಡೆ ಬರದ ಹಾಗೆ ಮಾಡಿದ್ದು ಒಂದು ಉದಾಹರಣೆ, ಅಲ್ಲಿ ಏನು ನಡೆಯುತ್ತದೆ ಎನ್ನುವುದು ಯಾರಿಗೂ ತಿಳಿಯದಿದ್ದ ಹಾಗೆ ಮಾಡಿ ಇದು ಫಾರೆಸ್ಟ್ ಡಿಪಾರ್ಟ್ ಮೆಂಟ್ ನ ಸಾಮ್ರಾಜ್ಯ ಎಂದು ಮೆರೆದು ರಾಜಸ್ತಾನದ ಸಾರಿಸ್ಕ ಹುಲಿಧಾಮದಲ್ಲಿ ಒಂದೇ ಒಂದು ಹುಲಿ ಕೂಡ ' ಕಾಣದಂತೆ ಮಾಯ' ವಾಗಿದ್ದ ನಿದರ್ಶನ ಪರಿಸರ ಪ್ರೇಮಿಗಳ ಮನದಲ್ಲಿ ಅಚ್ಚಳಿಯದೇ ಉಳಿದಿದೆ. ಅದೂ ಕೂಡ ಹೇಗೆಂದರೆ ಕಾರ್ಗಿಲ್ ಯುದ್ಧ ನಡೆದಾಗ ಅಮೆರಿಕನ್ನರು ಶತ್ರುಗಳು ನುಗ್ಗುತ್ತಿದ್ದಾರೆ ನೋಡಿ ಎಂದು ಬಡಿದೆಬ್ಬಿಸಿದಾಗ ಎಚ್ಚೆತ್ತ ಹಾಗೆ ಇಲ್ಲಿಯೂ ಕೂಡ ವೈಲ್ಡ್ ಲೈಫ್ ಸೊಸೈಟಿಯಿಂದ ಲೇಡಿಯೊಬ್ಬರು (ಬೆಲಿಂಡ ರೈಟ್) ಪ್ರಚಾರ ಮಾಡಿದಾಗ ವಿಧಿಯಿಲ್ಲದೆ ತಲೆತಗ್ಗಿಸಬೇಕಾಯಿತು. ಈ ಲೇಡಿ ಡೇರ್ ಡೆವಿಲ್ ಗೆ, ಹುಲಿಯ ಮೇಲೆ ಅದೇನೋ ವ್ಯಾಮೋಹವೋ ಏನೋ, ಪ್ರಾಣವೂ ಲೆಕ್ಕಿಸದೇ ಬ್ಲಾಕ್ ಮಾರ್ಕೆಟ್ಗಳಿಗೆ ನುಗ್ಗಿ ಅನೇಕ ಬೇಟೆಗಾರರ, ಸ್ಮಗ್ಲರ್ ಲಿಂಕ್ ಗಳನ್ನು ಭೇದಿಸಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರಪಡಿಸಿ ನಮ್ಮ ಪೊಲೀಸರು ಬೇರೆ ದಾರಿ ಕಾಣದೆ ಹಿಡಿದು ಹಾಕುವ ಹಾಗೆ ಮಾಡಿದ್ದಾಳೆ. ಫುಡ್ ಪಿರಮಿಡ್ನಲ್ಲಿ ನಮ್ಮ ದೇಶದ ಈಕೋ ಸಿಸ್ಟಂನಲ್ಲಿ ಹುಲಿಗೇ ಎತ್ತರದ ಸ್ಥಾನ. ಹುಲಿಯ ಸಂಖ್ಯೆ ಕ್ಷೀಣಿಸಿತು ಎಂದರೆ ನಮ್ಮ ವನ್ಯ ಆರೋಗ್ಯ ಕ್ಷೀಣಿಸಿತು ಎಂದರ್ಥ.

ಸರ್ಕಾರಕ್ಕೆ, ಸರ್ಕಾರದ ಕಾರ್ಮಿಕರ ಮೇಲೆ ನಂಬಿಕೆ ಇಲ್ಲದೆಯೋ ಅಥವ ಟ್ರಾನ್ಸ್ಪರೆಂಟ್ ಆಗಿರಲಿ ಎಂದೋ ಏನೋ ನಮ್ಮಂತ ವಾಲೆಂಟಿಯರ್ಸ್ಗೆ ಸುವರ್ಣಾವಕಾಶವೊಂದು ಸುವರ್ಣ ಕರ್ನಾಟಕದ ವತಿಯಿಂದ ಬಂದೊದಗಿತು. ಬಸ್ ಹತ್ತಿದಾಗಿನಿಂದಲೂ ಅದೃಷ್ಟ ಖುಲಾಯಿಸಿತು. ಅನೇಕರಿಗೆ ಸಿಗದ ಡೈರೆಕ್ಟ್ ನಾಗರಹೊಳೆ ಬಸ್ಸು ಸಿಕ್ಕಿತು. ಆದರೆ ನಾವು ಹುಣಸೂರು ಇಳಿಯಬೇಕಾಯಿತು. ಕತ್ತಲಾಗುತ್ತಿದ್ದಂತೆ ಒಬ್ಬೊಬ್ಬರೆ ಫಾರೆಸ್ಟ್ ಆಫೀಸಿನ ಮುಂದೆ ಜಮಾಯಿಸ ತೊಡಗಿದರು. ಅಲ್ಲೇ ರಿಜಿಸ್ಟ್ರೇಶನ್ ಮುಗಿಸಿ ಆಯಾ ರೇಂಜ್ ಗಳಿಗೆ ಫಾರೆಸ್ಟ್ ವೆಹಿಕಲ್ಸ್ ನಲ್ಲೇ ತಲುಪಿಸುವ ಕಾರ್ಯಕ್ರಮ. ಮಿನಿಸ್ಟರ್ ಕಡೆಯಿಂದ ಫಾರೆಸ್ಟ್ ಆಫೀಸರ್ ಕಡೆಯಿಂದ ಫೋನ್ ಮೇಲೆ ಫೋನ್ ಮಾಡಿ ನಮಗೆ ಆ ರೇಂಜ್ ಕೊಡಿ ಈ ರೇಂಜ್ ಕೊಡಿಸಿ ಎಂದು, ನಮಗೆ ಮೊದಲು ಕೊಡಿ ಎಂದೆಲ್ಲ ಇನ್ ಫ್ಲುಯೆನ್ಸ್ ಮಾಡಿಸುತ್ತಿದ್ದರು. ನಮ್ಮ ಬಳಿ ಫೋನ್ ಕೂಡ ಇರಲಿಲ್ಲ. ಸುಸ್ತಾಗಿ ಆಫೀಸಿ ನ ದ್ವಾರದ ಬಳಿ ಕುಳಿತಿದ್ದ ನಮಗೆ "ಬನ್ರೀ" ಎಂಬ ಶಬ್ಧ ಕೇಳಿಸುತ್ತಿದ್ದಂತೆಯೇ ನಮಗೇ ಕರೆದರೋ ಏನೋ ಎಂದು ಚಕ್ಕನೆ ಎದ್ದು ಒಳಹೋದೆವು. ನಮಗೇ ಮೊದಲ ಸೆಲೆಕ್ಷನ್. "ಏನ್ರೀ ಯಾವ ರೇಂಜ್ ಬೇಕು"? ಎಂದು ಕೇಳಿದೊಡನೆ ನಾನು ಮನೋಹರ ಇಬ್ಬರೂ ನಾಗರಹೊಳೆ ಎಂದು ಒಟ್ಟಿಗೆ ಥಟ್ಟನೆ ಉಚ್ಚರಿಸಿದನ್ನು ನೋಡಿ ಸರಿ "ನಾಗರಹೊಳೆ" ಯೆಂದು ಬರೆದೇ ಬಿಟ್ಟರು.

ಸ್ವಲ್ಪ ತಡ ಮಾಡಿದ್ದರೂ ಅವರ ಮನಸಿನಲ್ಲಿದ್ದ ಬೇರೆ ರೇಂಜ್ ಗೆ ಹಾಕುತಿದ್ದರೇನೋ. ನಾಗರಹೊಳೆಯಲ್ಲಿ ಹೆಚ್ಚು ಹುಲಿ ಇವೆಯೆಂದು ಎಲ್ಲರೂ ಅಲ್ಲಿಗೇ ಬೇಕೆಂದು ಆಫೀಸರ್ಗೆ ದುಂಬಾಲು ಬೀಳುತ್ತಿದ್ದರು. ರೇಂಜ್ ಗಳ ರೇಂಜ್ ಇರದ ನಮಗೆ ನಾಗರಹೊಳೆ ಕೂಡ ಒಂದು ರೇಂಜ್ ಎಂದು ತಿಳಿದಿರಲಿಲ್ಲ. ಹೊರಗೆ ಬಂದು ಒಂದು ಕ್ಷಣ ತಲೆ ಓಡದೆ ಇಷ್ಟೋಂದು ಸುಲಭವ ಎಂದನಿಸಿತು. ಸುತ್ತಮುತ್ತ ನಡೆಯುತ್ತಿದ್ದ ನಾಟಕ!! ಫಾರೆಸ್ಟ್ ಜೀಪ್ ಗಳಲ್ಲಿ ಆಯಾ ರೇಂಜ್ ಗಳಿಗೆ ಹೊರಟೆವು. ವೀರಣಹೊಸಹಳ್ಳಿ ರೇಂಜ್ ಬರುತ್ತಿದಹಾಗೆ ಪಡ್ಡೆ ಆನೆಯೊಂದು ಜೀಪಿನ ಕಡೆಗೆ ನುಗ್ಗಿ ಸರ್ವೇ ಸಾಮಾನ್ಯವಾಗಿ ಓಡಾಡುವ ಡ್ರೈವರ್ನನ್ನು ದಿಗಿಲಿಕ್ಕಿಸಿತು. ಆ ಯುವ ಬಿಸಿ ರಕ್ತ ಆನೆಗೆ ನಮ್ಮನ್ನು ನಮ್ಮ ಪಾಡಿಗೆ ಇರಲು ಬಿಡಿ ಎನ್ನುವ ಭಾವನೆ ಇರಬೇಕು.

ಮುಂದುವರಿಯುವುದು. . .





# ಹಕ್ಕಿ ಲೋಕ

* ಸ್ವಾಲೋಗಳ ಸಾಗರ

ವೈಜ್ಞಾನಿಕ ಹೆಸರು: ***Hirundo daurica***

ಇಂಗ್ಲೀಷ್ ಹೆಸರು: **Red-rumped Swallow**




ಚಾಮರಾಜನಗರದ ಯಾವುದೋ ಒಂದು ಶಾಲೆಗೆ ಭೇಟಿಕೊಟ್ಟಿದ್ದ ನಾವು ಯಳಂದೂರು ಮಾರ್ಗವಾಗಿ ನಾನು, ಮುರಳಿ, ಮತ್ತು ಶಂಕ್ರಪ್ಪ ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗಬೇಕೆಂದು ನಿಶ್ಚಯ ಮಾಡಿದೆವು. ಶಾಲೆಯ ಭೇಟಿ ಮುಗಿಸಿ ಯಳಂದೂರಿಗೆ ಬರುವಾಗ ಸುತ್ತಲೂ ಹಸಿರಾಗಿರುವ ಭತ್ತ, ಕಬ್ಬಿನ ಗದ್ದೆಗಳು, ನೋಡಲು ಸಂಜೆಯಲ್ಲಿ ಕಣ್ಣಿಗೆ ಆಹ್ಲಾದಕರವಾಗಿತ್ತು. ಯಳಂದೂರಿಗೆ ಬರುವ ವೇಳೆಗೆ ಸಂಜೆ ಐದು ಗಂಟೆ ಬಸ್ಸ್ ಸ್ಟಾಂಡಿನಲ್ಲಿ ಬಸ್ಸ್ ವಿಚಾರಿಸಿದರೆ, ರಾತ್ರಿ ಎಂಟಕ್ಕೆ ಎಂದು ಬಿಟ್ಟರು. ಮೂರು ಗಂಟೆ ಹೇಗೆ ಟೈಮ್ ಪಾಸ್ ಮಾಡೋದು?. ಎಂಬ ಚಿಂತೆ ಆವಾರಿಸಿತ್ತು.

ಹೊಟೇಲ್ ಗೆ ಹೋಗಿ ಕಾಫಿ ಮುಗಿಸಿ ಬಂದೆವು, ಅಲ್ಲೇ ಬಸ್ಸ್ ಸ್ಟಾಂಡಿನಲ್ಲಿ ಕಲ್ಲಿನ ಕಟ್ಟೆ ಮೇಲೆ ಕುಳಿತು ಅಲ್ಲಿನ ಜನ, ಉಡುಗೆ-ತೊಡಿಗೆ, ಅವರ ಭಾಷೆಯ ಶೈಲಿ, ಎಲ್ಲೋ ದೂರದಿಂದ ಪ್ರವಾಸಕ್ಕೆಂದು ಬಂದ ಜನ ಬಸ್ಸುಗಳಿಗೆ ಕಾಯುತ್ತಿದ್ದರು ಬಸ್ಸುಗಳನ್ನು ಏರಿ ಹೋಗುತ್ತಿದರು. ಅಲ್ಲೇ ತಲೆ ಎತ್ತಿ ಸ್ವಲ್ಪ ನೋಡಿದೆವು. ಒಂದು ಭವ್ಯವಾದ

ಮೈಸೂರು ಮಹಾರಾಜರು ಕಟ್ಟಿಸಿದ್ದ ಒಂದು ಹಳೆಯ ಕಟ್ಟಡ ಕಾಣಿಸಿತು. ನಮಗೆ ಮೊದಲೇ ಹಳೆಯ ಕಟ್ಟಡಗಳು ಹಾಗೂ ಅವುಗಳ ಇತಿಹಾಸವನ್ನು ಕೇಳುವುದೆಂದರೆ ಇಷ್ಟ.



ಶಂಕ್ರಪ್ಪನು "ಏ ನಡಿರಪ್ಪೋ. . .! ಆ ಬಿಲ್ಡಿಂಗ್ ತುಂಬ ಹಳೆದಿದಾಂಗದೆ ನೋಡಾನ" ಎಂದು. ಹತ್ತಿರ ಹೋಗಿ ನೋಡಿದರೆ ಕಟ್ಟಡಕ್ಕೆ ಬೀಗ ಜಡಿದಿತ್ತು. ಸುತ್ತಲೂ ಕಸದ ರಾಶಿ, ಬಸ್ಸ್ ಸ್ಟಾಂಡಿನ ಪಕ್ಕದಲ್ಲೇ ಕಟ್ಟಡ ಇರುವುದರಿಂದ ಜನಗಳ ಇತರ ಇಲ್ಲೀಗಲ್ ಚಟುವಟಿಕೆಗಳಿಗೆ ಗುರಿಯಾಗಿದೆ, ಕಟ್ಟಡದ ಮೇಲೆಲ್ಲ ನೂರಾರು ಪಾರಿವಾಳಗಳ ವಾಸಸ್ಥಳವು ಕೂಡ, ಮೈನಗಳು ಗೂಡುಗಳನ್ನು ಕಟ್ಟಿಕೊಂಡಿವೆ, ಬಾವಲಿಗಳಿಗೆ ಇದೇ ಗುಹೆಯಾಗಿದೆ, ಗುಬ್ಬಿಗಳಿಗಂತೂ ಇದೇ ಸ್ವರ್ಗವಾಗಿ ಮಾರ್ಪಟ್ಟಿದೆ, ಅಲ್ಲೇ ಕಸದ ರಾಶಿಯಲ್ಲಿ ಒಂದು ಹಳೆಯಾದಾದ ಪ್ರಾಶ್ಚತ್ಯ ಇಲಾಖೆಯ ಒಂದು ಬೋರ್ಡ್ ತುಂಬ ಕಷ್ಟಪಟ್ಟು ನಮ್ಮಂತವರಿಗೆ ಈ ಕಟ್ಟಡದ ಇತಿಹಾಸವನ್ನು ಸಾರುತ್ತಿತ್ತು. ಅದರೆ ಇದನ್ನು ನೋಡಿ, ಓದಿ ತಿಳಿದುಕೊಳ್ಳುವರು ಇರಲಿಲ್ಲ ಅಷ್ಟೆ. . .!, ಒಟ್ಟಿನಲ್ಲಿ ಈ ಕಟ್ಟಡವು ಭೂತಗಳ ಬಂಗಲೆಯಂತೆ ಕಾಣಿಸುತ್ತಿದರೂ ಬಹಳ ಸುಂದರವಾಗಿ ನೂರಾರು ಜೀವಿಗಳಿಗೆ ಆಶ್ರಯ ನೀಡಿತ್ತು. ಶಂಕ್ರಪ್ಪನು ಹತ್ತಿರಕ್ಕೆ ಹೋಗಿ ಕಷ್ಟಪಟ್ಟು ಕಟ್ಟಡದ ಇತಿಹಾಸವನ್ನು ಓದುತ್ತಿದ, ನಾವುಗಳು ಕೆಳಗಿಂದ ಮೇಲಿನವರೆಗೆ ನೋಡಿ ಕಣ್ಣ್ ತುಂಬಿಕೊಳ್ಳುತ್ತಿದ್ದೆವು.

ಅಲ್ಲಿನ ಜನಕ್ಕೆ ನಮ್ಮನ್ನು ಕಂಡು ಕಾಮನ್ ಸೆನ್ಸ್ ಇಲ್ಲದೆ ಬಂದು "ಏನ್ ರೀ ನೋಡ್ತಿದಿರಾ ಮೇಲೆ. . .?" ಎಂದು ಕೆಳಿದ. ಇನ್ನೊಬ್ಬ ಅಲ್ಲೇ ಉಚ್ಚೆಬಿಡಲು ಬಂದಿದ್ದವ " ಏ ದೆವ್ವದ ಮನೆರೀ ಅದು, ತುಂಬ ಗಲಿಜು ಹೋಗಿ ದೂರದಿಂದ ನೋಡಿ" ಎಂದು ಗದರಿಸಿ ಅಲ್ಲೇ ಕಟ್ಟಡದ ಗೋಡೆಗೆ

ಉಚ್ಚೆ ಹೊಡೆದು ಹೋದ. ಅಲ್ಲೇ ಸ್ವಲ್ಪ ದೂರದಲ್ಲಿ ಕುಳಿತ್ತಿದ್ದ ಒಬ್ಬ ಮುದುಕ ನಮ್ಮನು ಗಮನಿಸಿದನೋ ಏನೋ ಎದ್ದು ಬಂದು,

"ಏನ್ ಸಾಮಿ ಯಾವೂರು?" ಎಂದ.

ನಾನು "ಬೆಂಗ್ಳೂರು" ಎಂದೆ.



"ನೋಡಿ ಸಾಮಿ ಈ ಕಟ್ಟಡನಾ ಮೈಸೂರು ಮಹಾರಾಜರು ಕಟ್ಟಿಸಿದ್ದು, ತುಂಬ ಹಳೆ ಕಟ್ಟಡ, ನಾವು ಚಿಕ್ಕ ಹುಡುಗರಾಗಿದ್ದಾಗ ತುಂಬ ಚೆನ್ನಾಗಿತ್ತು. ಮಹಾರಾಜರು ಬಂದು ಹೋಗುತ್ತಿದ್ರು, ಆಮೇಲೆ ತುಂಬ ವರ್ಷಗಳು ಹಾಗೆ ಇತ್ತು. ನಂತರ ಸರ್ಕಾರಕ್ಕೆ ಸೇರ್ಕೋಬಿಡ್ತು, ಅವರು ಈ ಬೋರ್ಡ್ ಅಕ್ಬಿಟೋದೊರು ಮತ್ತೆ ಬರಲೇ ಇಲ್ಲ. ಈಗ ನೋಡಿ ಪಾಳುಬಿದ್ದಿದೆ" ಎಂದು. ಕಟ್ಟಡದ

ಇತಿಹಾಸವನ್ನು ಹೇಳಿ ಸರ್ಕಾರವನ್ನು ಬೈದು. . .! ತನ್ನ ಬೇಜಾರನ್ನು ತೋಡಿಕೊಂಡ.




ಮೂವರು ಹಾಗೇ ಕಟ್ಟಡವನ್ನು ನೋಡುತ್ತಾ ಮೇಲೆ ಆಕಾಶವನ್ನು ನೋಡಿದ್ದೇ ಮೂವರೂ ಏನನ್ನು ಮಾತಾಡದೆ ಆಕಾಶವನ್ನು ನೋಡುತ್ತಲೇ ನಿಂತುಬಿಟ್ಟೆವು, ಸುಮಾರು ಅರ್ಧ ತಾಸಿನವರೆಗೆ. ಆಕಾಶದಲ್ಲಿ ಏನಿದೆ. . .! ಅರ್ಧ ತಾಸು ನೋಡುವಂತಹದು ಎಂದು ಕೊಂಡಿರಾ, ಸಾವಿರಾರು ಸ್ವಾಲೋ ಹಕ್ಕಿಗಳು ಪಶ್ಚಿಮದಿಂದ ಪೂರ್ವಕ್ಕೆ ಹಾರಿ ಹೋಗುತ್ತಿದ್ದವು, ಮೂವರು ಕತ್ತಲಾಗುವ ತನಕ ಹಕ್ಕಿಗಳನ್ನು ಲೆಕ್ಕ ಹಾಕುತ್ತಾ. . .ನಿಂತ್ತಿದ್ದು, ಇಂದಿಗೂ ಆಗಾಗ ನೆನಪು ಮೂಡುತ್ತದೆ. ನಾನು ಶಂಕ್ರಪ್ಪನಂತು ಸಾವಿರಾರು ಹಕ್ಕಿಗಳನ್ನು ಎಣಿಸಿ ಚಕಿತರಾದೆವು. ಇಷ್ಟೊಂದು ಹಕ್ಕಿಗಳನ್ನು ಎಡೆಬಿಡದೆ ಹಾರಿ ಹೋಗುತ್ತಿರುವುದನ್ನು ಅದೇ ಮೊದಲು ನೋಡಿದ್ದು.! ಮೂವರಿಗೆ ಫುಲ್ ಖುಷ್ ಆಗಿ. ಕಟ್ಟಡದ ವಿಚಾರವನ್ನು ಮರೆತೆವು. ಅದಿರಲಿ ಎಂಟು ಗಂಟೆಗೆ ನಾವು ಹೊರಡುವ ಕೊನೆಯ ಬಸ್ಸನ್ನೇ ಮರೆತೆವೆನೋ . .! ಎಂದು ಗಂಟೆ ನೋಡಿದ್ದೆವು, ಸಧ್ಯ! ಬರಿ ಏಳು ಗಂಟೆಯಾಗಿತ್ತು ಬಿಡಿ.

ಅದೇನೆ ಇರಲ್ಲಿ ಮುಖ್ಯವಾಗಿ ಅಂತಹ ಹಳೆಯ ಕಟ್ಟಡಗಳನ್ನು ಉಳಿಸಿಕೊಳ್ಳುವುದು ಬಹಳ ಮುಖ್ಯ. ಹಲವಾರು ಪಕ್ಷಿಗಳಿಗೆ ಹಳೆಯ ಕಟ್ಟಡಗಳು ಆವಾಸಗಳಾಗುತ್ತವೆ, ಅವುಗಳನ್ನು ಉಳಿಸಿಕೊಳ್ಳುವುದು ನಮ್ಮ ಕರ್ತವ್ಯ. ಇನ್ನೂ ಅಷ್ಟೊಂದು ಹಕ್ಕಿಗಳು ಎಡೆಬಿಡದೆ ಹಾರುತ್ತಿದದ್ದು ಆಶ್ಚರ್ಯವಾದದ್ದು ಮನೆಗೆ ಬಂದ ಮೇಲೆ ಮೊದಲ ಕೆಲಸ ಸ್ವಾಲೋಗಳ ಜೀವನ, ಅವುಗಳ ಆಹಾರ, ವಲಸೆ ಇತ್ಯಾದಿಗಳ ಬಗ್ಗೆ ತಿಳಿದುಕೊಳ್ಳುವುದೆಂದು ಪುಸ್ತಕಗಳು, ಇಂಟರ್ ನೆಟ್, ಲೈಬ್ರರಿ ಎಲ್ಲವನು ಜಾಲಾಡಿದಾಗ ಸಿಕ್ಕಿದ್ದು.

ಈ ಹಕ್ಕಿ, ಗುಬ್ಬಚ್ಚಿ ಗಾತ್ರದ ಮಿರುಗುವ ಮಂದ ನೀಲಿ ಮತ್ತು ಮಾಸಲು ಬಿಳಿ ಬಣ್ಣ, ನೆತ್ತಿ, ಬೆನ್ನು ,ಬಾಲ ಮತ್ತು ರೆಕ್ಕೆಗಳು ಮಿರುಗುವ ಕಡು ನೀಲಿ, ರೆಕ್ಕೆಯ ಅಂಚುಗಳು ಬೂದುಬಣ್ಣವಾಗಿದ್ದು. ಮುಖ, ಕತ್ತಿನ ಹಿಂಭಾಗದಲ್ಲಿ ಕಂದು, ಗದ್ದ, ಕತ್ತು, ಎದೆ ಹಾಗೂ ತಳಭಾಗವು ಮಾಸಲು ಬಿಳಿಯಾಗಿರುತ್ತದೆ. ಚಿಕ್ಕದಾದ ಕೊಕ್ಕು ಹಾಗೂ ಕಾಲುಗಳು ಕಪ್ಪು ಬಣ್ಣವಾಗಿದ್ದು. ಬಾಲ ಆಂಟೆನಗಳಂತೆ ಕವಲೊಡೆದಿರುತ್ತದೆ. ಇವು ಸಾಮಾನ್ಯವಾಗಿ ಹಾರಾಡುತ್ತಾ ಇರುತ್ತವೆ ಮತ್ತು ಕಂಬ, ತಂತಿ ಎತ್ತರದ ಕಟ್ಟಡಗಳ ಮೇಲೆ ಕುಳಿತಿರುತ್ತವೆ, ಇವುಗಳ ಕೂಗು ಚಿರ್ರ್. . .ಚಿರ್ರ್. . .ಚಿರ್ರ್. . .ಎಂದು ಕೂಗುತ್ತವೆ. ಇವು ತಮ್ಮ ಗೂಡನ್ನು ವಿಶೇಷವಾಗಿ ನಿರ್ಮಿಸುತ್ತವೆ. ಮಣ್ಣನ್ನು ತನ್ನ ಎಂಜಲಿನಿಂದ ಬೆರೆಸಿ ವಿಶಿಷ್ಟವಾದ ವಿನ್ಯಾಸದಿಂದ ಬಂಡೆಯ ಸಂದುಗಳು, ಕಟ್ಟಡದ ಸೂರಿನ ಕೆಳಗೆ, ಕೆಳಮುಖ ಪ್ರವೇಶವಿರುವಂತೆ ಗೂಡನ್ನು ಕಟ್ಟುತ್ತವೆ.

ನೀವೂ ಸಹ ಒಮ್ಮೆ ಈ ಹಕ್ಕಿಯ ಗೂಡು ಕಟ್ಟುವುದನ್ನು ಗಮನಿಸಿ ನೋಡಿ. . .! ಎಷ್ಟು ಸುಂದರವಾಗಿ ಮಣ್ಣ ಕಲಸಿ ಕಟ್ಟುತ್ತವೆ ಎಂಬುದನ್ನು. ಅದರ ಮಜವೇ ಬೇರೆ. . .!



ವಿವಿ ಅಂಕಣ

# ವಿದ್ಯಾರ್ಥಿಗಾಗಿ ವಿಜ್ಞಾನ

❖ **ಹುಟ್ಟು ಹಬ್ಬದ ಹಾರ್ದಿಕ ಶುಭಾಶಯಗಳು!**

ಇನ್ನೂ ಹೋಗ್ತಾ ಇದೆ? ಎಡ್ ಸ್ಟೋನ್ ಎಂಬಾತನ ಟೀಮು, 5 ಸೆಪ್ಟೆಂಬರ್ 1977 ರಂದು ವೋಯೇಜರ್ ಎಂಬ ಗಗನ ನೌಕೆಯನ್ನು ಹಾರಿ ಬಿಡುವಾಗ ಈ ನೌಕೆ ಇಷ್ಟು ಸುಧೀರ್ಘ ಪಯಣ ಮಾಡುತ್ತದೆ ಎಂದು ಕನಸಿನಲ್ಲೂ ಕೂಡ ಊಹಿಸಿರಲಿಲ್ಲ. 35ನೇ ವರ್ಷದ ಸಂಭ್ರಮ ಏನೆಂದರೆ? ಅದು ನಮ್ಮ ಸೌರ ಮಂಡಲದ ತುದಿ ಮುಟ್ಟುತಿದೆ. ಆ ತುದಿಯನ್ನು ಹೀಲಿಯೋಪಾಸ್ ಎಂದು ಕರೆದಿದ್ದಾರೆ. ನಮ್ಮ ಸೂರ್ಯನ ವಿದ್ಯುತ್ ಕಣಗಳು ಎಲ್ಲಿಯವರೆಗೂ ಹರಡಿದೆಯೋ ಅದೇ ನಮ್ಮ ಸೌರ ಮಂಡಲದ ತುದಿ. ಕ್ಯಾಲ್ಟೆಕ್ ನಲ್ಲಿ ಕೆಲಸ ಮಾಡುತ್ತಿರುವ ಸ್ಟೋನ್ ಹೇಳುವಂತೆ "ನಾವು ಶುರು ಮಾಡಿದಾಗ ಅಂತರಿಕ್ಷ ಯುಗ ಪ್ರಾರಂಭವಾಗಿ ಕೇವಲ 20 ವರ್ಷಗಳಾಗಿದ್ದವು, ವೋಯೇಜರ್-1 ಸೂರ್ಯನಿಂದ ಇಷ್ಟು ದೂರ ಹೋಗುವ ಗುರಿ ಕೂಡ ಇರಲಿಲ್ಲ" ಈಗಲೂ ಸಹ ವೋಯೇಜರ್-1 ರ ನಾಲ್ಕು ಉಪಕರಣಗಳು ಮಾಹಿತಿ ರವಾನಿಸುತ್ತಿವೆ.

ಇದು ಎಂಟು ವರ್ಷದ ಕೆಳಗಷ್ಟೇ ಸೌರ ಮಂಡಲದ ತುದಿಯ ಅರೆ ಬರೆ ಗುರುತುಗಳನ್ನು ರವಾನಿಸಲು ಶುರು ಮಾಡಿತ್ತು. ಆದರೆ ಈಗ ತುದಿ ದಾಟಿ ಹೋಗುತ್ತಿರುವುದು ಸಂತೋಷದ ಜೊತೆಗೆ ಕ್ಲಿಷ್ಟಕರ ವಿಷಯ.



ಪಯಣ ಮುಂದುವರೆದರೆ ವೋಯೇಜರ್-1 ಡೆಡ್ ಜೋನ್ ಗೆ ಹೋಗಬಹುದು ಎಂದು ಡೆಕರ್ ವಿಜ್ಞಾನಿಯ ಟೀಮ್ ಹೇಳುತ್ತಾರೆ. ಏಕೆಂದರೆ ಅದು ಈಗ ಸೂರ್ಯನಿಂದ ಇರುವ ಅಂತರದಲ್ಲಿ ಅಲ್ಲಿನ ಕಣಗಳು ಶೂನ್ಯ ವೇಗವಿದ್ದು, ಈ ನೌಕೆ ಕೂಡ ವೇಗ ಕಳೆದುಕೊಳ್ಳುತ್ತಿದೆ. ವೇಗ ಕಳೆದುಕೊಳ್ಳುವುದು ತುದಿ ಮುಟ್ಟುತಿದೆ ಎನ್ನುವುದಕ್ಕೆ ಸೂಚಕವೆಂದು ತಿಳಿದಿದ್ದರು. ಆದರೆ ಅಲ್ಲಿ ಸೂರ್ಯನ ಕಣಗಳು 5 ಮಿಲಿಯನ್ ವರ್ಷಗಳ ಹಿಂದೆ ಸಿಡಿದ ಸೂಪರ್ನೋವೆಯ ಸಿಡಿತದ ಮಾರುತಕ್ಕೆ ಡಿಕ್ಕಿ ಹೊಡೆದು ಬೇರೆ ದಿಕ್ಕಿಗೆ ತಳ್ಳಲ್ಪಡುತ್ತಿವೆ. ಇದನ್ನು ಪರೀಕ್ಷಿಸಲು ಡೆಕ್ಕರ್ ತಂಡ ವೋಯೇಜರ್-1 ನೌಕೆಗೆ 7 ಬಾರಿ ತಿರುಗಲು ಸಂದೇಶ ಕಳುಹಿಸಿ (17 ಘಂಟೆಗಳು) ಲಂಭದಲ್ಲಿ ಅಲ್ಲಿನ ಕಣಗಳ ವೇಗವನ್ನು ದಾಖಲಿಸಿದ್ದಾರೆ. ಕೌತುಕವೆಂದರೆ ಅವು ಶೂನ್ಯ ವೇಗದಲ್ಲಿದ್ದು ಯಾವುದೇ ಮಾರುತಗಳಿಂದ ತಳ್ಳಲ್ಪಡುತ್ತಿಲ್ಲ. ಇದರಿಂದ ವೋಯೇಜರ್-1 ತುದಿ ಹತ್ತಿರವಿಲ್ಲವೆಂದು ಅವರು ಪ್ರತಿಪಾದಿಸಿದ್ದಾರೆ. ಅಲ್ಲಿನ ಕಣಗಳು ಏಕೆ ನಿಶ್ಚಲವಾಗಿವೆ ಎಂಬ ಪ್ರಶ್ನೆ ನಿಗೂಡವಾಗಿಯೇ ಇದೆ. ನಮ್ಮ ಸೌರ ಮಂಡಲದ ಹೊರಗಡೆ ಗ್ಯಾಲಾಕ್ಸಿಯ ಅಂತರಿಕ್ಷದಲ್ಲಿ ಹೇಗಿದೆ ಎಂಬುದೂ ಕೂಡ ನಿಗೂಡ.

ಇನ್ನೊಂದು ತಂಡದ ಪ್ರಕಾರ ಈ ವರ್ಷದ ಮೇ ತಿಂಗಳಲ್ಲಿ ಕಾಸ್ಮಿಕ್ ಕಿರಣಗಳ ಸಿಡಿತದಿಂದ ಉಂಟಾದ ಶಕ್ತಿಯುತ ಪ್ರೋಟಾನ್ ಗಳು ಸೌರಮಂಡಲದ ಹೊರಗಿಂದ ಬಂದದ್ದನ್ನು ನಮ್ಮ ನೌಕೆ ದಾಖಲಿಸಿದೆ. ಜುಲೈ ತಿಂಗಳಲ್ಲಿ ಅವು ಹಿಂದಿರುಗಿದ್ದು ವೇಗ ಮತ್ತು ಶಕ್ತಿಯಲ್ಲಿ ಬದಲಾವಣೆ ಇರುವುದನ್ನು ಗಮನಿಸಿ, ನಮ್ಮ ನೌಕೆ ತುದಿ ಮುಟ್ಟುತ್ತಿದೆ ಮತ್ತು ಈ ವರ್ಷದ ಅಂತ್ಯಕ್ಕೆ ದಾಟುವ ಸಂಭವವಿದೆ ಎನ್ನುತ್ತಾರೆ. ಆದರೆ ಪ್ರಕೃತಿಯನ್ನು ನಾವು ಊಹಿಸಲಾಗದು ಎಂದೂ ಒಪ್ಪಿಕೊಳ್ಳುತ್ತಾರೆ.

ಆದರೆ ಇದಾವುದರಿಂದ ವಿಚಲಿತರಾಗದ ಸ್ಟೋನ್ ತಂಡಕ್ಕೆ 2025 ರ ವೇಳೆಗೆ ಎರಡೂ ನೌಕೆಗಳ ಪ್ಲುಟೋನಿಯಮ್ ಐಸೋಟೋಪ್ ಖಾಲಿಯಾಗುವ ಮುನ್ನ ತುದಿ ದಾಟುತ್ತವೆ ಎಂಬ ಅಪಾರ ನಂಬಿಕೆ ಇದೆ. ವೋಯೇಜರ್ನಿಂದ ನಾವು ಕಲಿತದ್ದೇನೆಂದರೆ, ಆಶ್ಚರ್ಯಗಳನ್ನು ಎದುರಿಸಲು ಸನ್ನದ್ಧರಾಗಿರುವುದು ಎನ್ನುತ್ತಾರೆ.



# ನನ್ನ ದನಿ

ನೆಲದಿಂದ ಮೂರಡಿ ಮೇಲೆ
ಅಬ್ಬ ! ಏನು ಗಡ್ಡು !
ಭೂಮಿಯ ಒಳಗಿರೋ ಬೇರು
ಇನ್ನೂ ವಿಡ್ತು. !

ಮೇಲೆ ಚಿಗುರೆಲೆಗಳ ಚಿತ್ತಾರ
ಕೆಳಗೆ ತರಗೆಲೆಗಳ ವಿಸ್ತಾರ
ಬೆಳೆಬೆಳೆದಿದೆ ಅರಳಿದೆ
ಹೂ ಅರಳಿದೆ ಬರಪೂರ.
ಖಗ ಮೃಗ ಜಲದಿಂದ
ಇಬ್ಬನಿ ತುಂಬಿಹ ಎಲೆಯಿಂದ
ಅರಳಿದ ಹೂಗಳ ಆ ಚಲುವು
ಓ ಇನ್ನೆಲ್ಲಿದೆ ಆ ಚಂದ.

ಡ್ಯಾಮಿನ ನೀರಲಿ ಮುಳುಗಿಸಿದಿರಿ
ಕಾಡಿಗೆ ಕಾಡೆ ಉರಿಸಿದಿರಿ
ಮಕ್ಕಳ ಕೈಲಿ ಗುದ್ದಲಿ ಕೊಟ್ಟು
ಗಿಡವನು ನಡೆಸಿ ಕ್ಲಿಕ್ಕಿಸಿರಿ
ನೀವು ಮಾತ್ರಾ ಆರಾಮಿರಿ.

ಬಂದಿರಿ ಆಳೆದಿರೆ ನನ್ನಯ ದಪ್ಪ
ಓ ಎಷ್ಟೆತ್ತರಕ್ಕಿದೆ ! ಏನು ದಪ್ಪ !
ತಿಳಿಯದೇ ಹೋಯಿತು
ಕೇಳದೆ ಹೋಯಿತು ನನ್ನದನಿ.

- ಶ್ರೀ ಶಂಕರಪ್ಪ.ಕೆ.ಪಿ

